# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮಾನೆ ಶ್ರೀನಿವಾಸ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1247** |
| ಉತ್ತರಿಸಬೇಕಾದ ದಿನಾಂಕ | : | 22.09.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಹಾವೇರಿ, ಗದಗ ಹಾಗೂ ಧಾರವಾಡ ಜಿಲ್ಲೆಯಲ್ಲಿ 2017-18 ರಿಂದ 2020-21 ನೇ ಸಾಲಿನ ಅವಧಿಯಲ್ಲಿ ವಸತಿ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಅನುಮತಿ ದೊರೆಯದಿರುವ ಮನೆಗಳ ಸಂಖ್ಯೆ ಎಷ್ಟು ; | ಹಾವೇರಿ, ಗದಗ ಹಾಗೂ ಧಾರವಾಡ ಜಿಲ್ಲೆಯಲ್ಲಿ 2017-18 ರಿಂದ 2020-21 ನೇ ಸಾಲಿನಲ್ಲಿ ವಿವಿಧ ವಸತಿ ಯೋಜನೆಯಡಿಯಲ್ಲಿ ಸರ್ಕಾರದಿಂದ 75175 ಮನೆಗಳ ಗುರಿಯನ್ನು ನಿಗದಿಪಡಿಸಲಾಗಿದ್ದು, ಈ ಮನೆಗಳಿಗೆ ಎದುರಾಗಿ 56997 ಫಲಾನುಭವಿಗಳನ್ನು ಆಯ್ಕೆ ಮಾಡಿ ಕಾಮಗಾರಿ ಆದೇಶ ನೀಡಲಾಗಿದೆ. ವಿವರ ಕೆಳಕಂಡಂತಿದೆ.<br><br>**ಜಿಲ್ಲೆ** / **ನಿಗದಿ ಪಡಿಸಿದ ಗುರಿ** / **ಮಂಜೂರಾದ ಮನೆಗಳ ವಿವರ**<br>ಗದಗ / 23600 / 18464<br>ಧಾರವಾಡ / 20606 / 14404<br>ಹಾವೇರಿ / 30969 / 24129<br>**ಒಟ್ಟು** / **75175** / **56997** |
| (ಆ) | ಹಾವೇರಿ, ಗದಗ, ಧಾರವಾಡ ಜಿಲ್ಲೆಗಳಲ್ಲಿ 2017-18 ರಿಂದ 2020-21 ನೇ ಸಾಲಿನ ಅವಧಿಯಲ್ಲಿ ಮಂಜೂರಾದ ಮನೆಗಳಿಗೆ ಅನುಮತಿ ದೊರೆಯದಿರುವುದರಿಂದ ಸಾರ್ವಜನಿಕರು ತೊಂದರೆಗೆ ಸಿಲುಕಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ ; | ಇನ್ನುಳಿದ ಮನೆಗಳಿಗೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂಖ್ಯೆ:ವಇ 12 ಹೆಚ್ಎಹೆಚ್ 2020 ದಿನಾಂಕ:19.05.2020 ರನ್ವಯ ವಿವಿಧ ವಸತಿ ಯೋಜನೆಯಡಿ ಆಯ್ಕೆಯಾಗದ ಮತ್ತು ವಿವಿಧ ಲಾಗಿನ್ ಹಂತದಲ್ಲಿದ್ದ ಮನೆಗಳನ್ನು ಹಿಂಪಡೆದು ರದ್ದುಗೊಳಿಸಲಾಗಿರುತ್ತದೆ.<br><br>ಹಾವೇರಿ, ಗದಗ ಹಾಗೂ ಧಾರವಾಡ ಜಿಲ್ಲೆಯಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ)ದ ಎ.ಹೆಚ್.ಪಿ. (18350) & ಬಿ.ಎಲ್.ಸಿ. (Non-Convergence-10436) ಘಟಕಗಳಡಿ ಒಟು 28786 ಮನೆಗಳನ್ನು ನಿರ್ಮಿಸಲು ಮಂಜೂರ ಮಾಡಲಾಗಿದೆ. |
| (ಇ) | ಹಾವೇರಿ, ಗದಗ ಹಾಗೂ ಧಾರವಾಡ ಜಿಲ್ಲೆಯಲ್ಲಿ 2017-18 ರಿಂದ 2020-21 ನೇ ಸಾಲಿನ ಅವಧಿಯಲ್ಲಿ ಅನುಮತಿ ದೊರೆಯದ ಮನೆಗಳಿಗೆ ಅನುಮತಿ ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು ? | 2021-2022 ನೇ ಸಾಲಿನಲ್ಲಿ ರಾಜ್ಯ ಪುರಸ್ಕೃತ ಯೋಜನೆಯಡಿ 1 ಲಕ್ಷ ಮನೆಗಳ ಗುರಿಯನ್ನು ನಿಗದಿಪಡಿಸಲಾಗಿದೆ. ಪ್ರಧಾನ ಮಂತ್ರಿ ಆವಾಸ್ (ಗ್ರಾಮೀಣ) ಯೋಜನೆಯಡಿ ಕೇಂದ್ರ ಸರ್ಕಾರದಿಂದ ಪರಿಷ್ಕೃತ ಗುರಿಯನ್ನು ನಿರೀಕ್ಷಿಸಲಾಗಿದೆ. ಸದರಿ ಗುರಿಯನ್ನು ಯೋಜನಾವಾರು/ವಿಧಾನ ಸಭಾ ಕ್ಷೇತ್ರವಾರು ಹಂಚಿಕೆ ಮಾಡಲು ಕ್ರಮ ವಹಿಸಲಾಗುತ್ತಿದೆ.<br><br>ಸರ್ಕಾರದ ಆದೇಶ ಸಂಖ್ಯೆ:ವಇ 44 ಹೆಚ್ಎಹೆಚ್ 2021(ಭಾಗ-1), ದಿನಾಂಕ: 09.09.2021 ರಂದು ಆದೇಶ |

| | | |
|---|---|---|
| | | ಹೊರಡಿಸಿ, ಕೇಂದ್ರ ಸರ್ಕಾರದಿಂದ 4 ಲಕ್ಷ ಹೊಸ ಮನೆಗಳ ಗುರಿಗೆ ಈವರೆಗೆ ಅನುಮೋದನೆಯು ದೊರೆಯದೇ ಇರುವ ಹಿನ್ನಲೆಯಲ್ಲಿ ರಾಜ್ಯ ಸರ್ಕಾರದ ವಿವಿಧ ವಸತಿ ಯೋಜನೆಗಳಡಿ 4 ಲಕ್ಷ ಮನೆಗಳ ಹೊಸ ಗುರಿಗೆ ಎದುರಾಗಿ ಫಲಾನುಭವಿಗಳ ಆಯ್ಕೆ ಪ್ರಕ್ರಿಯೆಯನ್ನು ಪ್ರಾರಂಭಿಸುವಂತೆ ಸೂಚಿಸಲಾಗಿದ್ದು, ಅರ್ಹ ವಸತಿ ರಹಿತರ ಫಲಾನುಭವಿಗಳಿಗೆ ಹಂತ-ಹಂತವಾಗಿ ಮನೆ ಮಂಜೂರು ಮಾಡಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. |

ಸಂಖ್ಯೆ :ವಇ 347 ಹೆಚ್‌ಎಂ 2021

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು